# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಸದಸ್ಯರ ಹೆಸರು | ಶ್ರೀ ರಘುನಾಥ ರಾವ್ ಮಲ್ಕಾಪೂರೆ (ವಿಧಾನ ಸಭೆಯಿಂದ ಚುನಾಯಿತರಾದವರು). |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 710 (842) |
| ಉತ್ತರಿಸಬೇಕಾದ ದಿನಾಂಕ | 09-03-2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಬೀದರ್ ನಗರದಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿ ವತಿಯಿಂದ ಕೈಗೊಳ್ಳಲಾಗಿರುವ ಕಾಮಗಾರಿಗಳಾವುವು; ಸದರಿ ಕಾಮಗಾರಿಗಳು ಯಾವ ಹಂತದಲ್ಲಿದೆ; (ಅನುದಾನದೊಂದಿಗೆ ವಾರ್ಡ್‌ವಾರು, ಕಾಮಗಾರಿವಾರು ಸ್ಪಷ್ಟ ಮಾಹಿತಿ ಒದಗಿಸುವುದು) | ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಬೀದರ ನಗರದಲ್ಲಿ ಕೈಗೊಳ್ಳಲಾಗಿರುವ ಕಾಮಗಾರಿಗಳ ವಿವರ ಈ ಕೆಳಗಿನಂತಿದೆ.<br><br>**<u>ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-2 ಕ್ಕೆ ಒಳಚರಂಡಿ ಯೋಜನೆ:-</u>**<br>ಸದರಿ ಯೋಜನೆಯಡಿ ವಾರ್ಡ ನಂ.23, 24, 25, 27, ಮತ್ತು 28ರಲ್ಲಿ ಪೂರ್ಣ ಹಾಗೂ ವಾರ್ಡ ನಂ.21, 22, 29 ಮತ್ತು 30 ರಲ್ಲಿ ಭಾಗಶಃ ಒಟ್ಟು 132.90 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗ, 12109 ಸಂಖ್ಯೆ ಒಳಚರಂಡಿ ಗೃಹ ಸಂಪರ್ಕಗಳು ಹಾಗೂ 17.26 ಎಮ್.ಎಲ್.ಡಿ ಸಾಮರ್ಥ್ಯದ ಮಲೀನ ನೀರು ಶುದ್ಧೀಕರಣ ಘಟಕದ ಕಾಮಗಾರಿಗಳನ್ನು ರೂ.116.00 ಕೋಟಿ ಅಂದಾಜು ಮೊತ್ತದಲ್ಲಿ ಕೈಗೊಂಡು ಪೂರ್ಣಗೊಳಿಸಲಾಗಿದೆ.<br><br>**<u>ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-3ಕ್ಕೆ ಒಳಚರಂಡಿ ಯೋಜನೆ(ಹೆಚ್ಚುವರಿ ಅನುದಾನ):-</u>**<br>ಸದರಿ ಯೋಜನೆಯಡಿ ವಾರ್ಡ ನಂ.16, 17, 18 ಮತ್ತು 19 ರಲ್ಲಿ ಭಾಗಶಃ ಒಟ್ಟು 67.00 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗ, 8025 ಒಳಚರಂಡಿ ಗೃಹ ಸಂಪರ್ಕಗಳು ಹಾಗೂ 7.00 ಎಮ್.ಎಲ್.ಡಿ ಸಾಮರ್ಥ್ಯದ ಮಲೀನ ನೀರು ಶುದ್ಧೀಕರಣ ಘಟಕ, 61.80 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗ ಹಾಗೂ 6060 ಒಳಚರಂಡಿ ಗೃಹ ಸಂಪರ್ಕ ಅಳವಡಿಸುವ ಕಾಮಗಾರಿಗಳನ್ನು ರೂ.57.79 ಕೋಟಿ |

| | | |
|---|---|---|
| | | ಅಂದಾಜು ವೆಚ್ಚದಲ್ಲಿ ಪೂರ್ಣಗೊಳಿಸಲಾಗಿದೆ. ವೆಟ್‌ವೆಲ್ ಹಾಗೂ 7.00 ಎಂ.ಎಲ್.ಡಿ ಮಲೀನ ನೀರು ಸಂಸ್ಕರಣ ಘಟಕ ನಿರ್ಮಿಸಲು ಸ್ಥಳವನ್ನು ದಿನಾಂಕ 02.02.2021 ರಂದು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿಗೆ ಹಸ್ತಾಂತರಿಸಲಾಗಿದ್ದು ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. ಫೆಬ್ರವರಿ 2021ರ ಅಂತ್ಯದವರೆಗೆ ಈ ಯೋಜನೆಗೆ ರೂ.32.66 ಕೋಟಿ ವೆಚ್ಚ ಮಾಡಲಾಗಿದ್ದು, ಸದರಿ ಕಾಮಗಾರಿಯನ್ನು ಡಿಸೆಂಬರ್ 2021ರಲ್ಲಿ ಪೂರ್ಣಗೊಳಿಸಿ ಚಾಲನೆಗೊಳಿಸಲು ಉದ್ದೇಶಿಸಲಾಗಿದೆ.<br><br>**ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-3 & 1 ರ ಬಿಟ್ಟು ಹೋದ ಪ್ರದೇಶಗಳಲ್ಲಿ ಒಳಚರಂಡಿ ಯೋಜನೆ(ಉಳಿತಾಯ ಮೊತ್ತದಲ್ಲಿ):-**<br>ಸದರಿ ಯೋಜನೆಯಡಿ ವಾರ್ಡ ನಂ.15, 16, 17, 29 ಮತ್ತು 30 ರಲ್ಲಿ ಬಿಟ್ಟು ಹೋದ ಭಾಗಶಃ ಒಟ್ಟು 38.90 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗ ಹಾಗೂ 2300 ಒಳಚರಂಡಿ ಗೃಹ ಸಂಪರ್ಕಗಳ ಕಾಮಗಾರಿಗಳನ್ನು ಪ್ರಸ್ತಾಪಿಸಲಾಗಿದ್ದು, ಸದರಿ ಯೋಜನೆಯಡಿ 14.00 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗ ಹಾಗೂ 150 ಒಳಚರಂಡಿ ಗೃಹ ಸಂಪರ್ಕ ಅಳವಡಿಸುವ ಕಾಮಗಾರಿಗಳನ್ನು . ರೂ.17.70 ಕೋಟಿ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲಾಗಿದೆ. ಫೆಬ್ರವರಿ-2021ರ ಅಂತ್ಯದವರೆಗೆ ಈ ಯೋಜನೆಗೆ ರೂ.1.77 ಕೋಟಿ ವೆಚ್ಚ ಮಾಡಲಾಗಿದೆ. ಕೋವಿಡ್-19ರಿಂದ ಕಾಮಗಾರಿಗಳು ವಿಳಂಬವಾಗಿದ್ದು, ಸದರಿ ಯೋಜನೆಯನ್ನು ಜುಲೈ 2021 ರಲ್ಲಿ ಪೂರ್ಣಗೊಳಿಸಲು ಉದ್ದೇಶಿಸಲಾಗಿದೆ. |
| ಆ) | ಬೀದರ್ ನಗರದಲ್ಲಿ ಯಾವುದೇ ಕಾಮಗಾರಿಯನ್ನು ಕೈಗೊಳ್ಳದಿರುವ ವಾರ್ಡ್‌ಗಳಾವುವು; ಸದರಿ ವಾರ್ಡ್‌ಗಳಲ್ಲಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳುವ ಯೋಜನೆಯನ್ನು ಸರ್ಕಾರ | ಬೀದರ ನಗರದ ಎಲ್ಲಾ 35 ವಾರ್ಡಗಳಲ್ಲಿ ಸಂಪೂರ್ಣವಾಗಿ ಅಥವಾ ಭಾಗಶಃ ಒಳಚರಂಡಿ ಕಾಮಗಾರಿಗಳನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಕೈಗೆತ್ತಿಕೊಳ್ಳಲಾಗಿದೆ. ವಾರ್ಡ ಸಂಖ್ಯೆ 17, 18, 19, 29, 30 ಮತ್ತು 31 ಗಳಲ್ಲಿ ಉಳಿದಿರುವ ಪ್ರದೇಶಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸಲು ಸ್ಥಳೀಯ ಸಂಸ್ಥೆಯಿಂದ ಕೋರಿಕೆ ಬಂದನಂತರ ಯೋಜನೆಯನ್ನು ರೂಪಿಸಲಾಗುವುದು. |

| | | |
|---|---|---|
| | ರೂಪಿಸಿದೆಯೇ; (ವಾರ್ಡ್‌ವಾರು ಮಾಹಿತಿ ಒದಗಿಸುವುದು). | |
| ಇ) | ಬೀದರ್ ನಗರದ ಹೊಸ ವಾರ್ಡ್‌ಗಳಿಗೆ ಒಳಚರಂಡಿ ಮತ್ತು ನೀರು ಸರಬರಾಜು ಮಾಡುವ ಬಗ್ಗೆ ಅಂದಾಜು ಪಟ್ಟಿಯನ್ನು ಸರ್ಕಾರ ಸಿದ್ಧಪಡಿಸಿದೆಯೇ; ಹಾಗಿದ್ದಲ್ಲಿ, ಯಾವ ಯಾವ ವಾರ್ಡ್‌ಗಳಲ್ಲಿ ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳಲಾಗುವುದು; (ವಾರ್ಡ್‌ವಾರು ಕಾಮಗಾರಿವಾರು ಅನುದಾನಗಳ ವಿವರಗಳೊಂದಿಗೆ ಮಾಹಿತಿ ಒದಗಿಸುವುದು) | ಬೀದರ್ ನಗರಸಭೆಯು ಒಟ್ಟು 35 ವಾರ್ಡ್‌ಗಳನ್ನು ಒಳಗೊಂಡಿರುತ್ತದೆ. ಇತ್ತೀಚೆಗೆ ಯಾವುದೇ ಹೊಸ ವಾರ್ಡ್‌ಗಳು ರಚನೆಯಾಗಿರುವುದಿಲ್ಲ. ಆದ್ದರಿಂದ ನಗರಸಭೆ ವತಿಯಿಂದ ಹೊಸ ವಾರ್ಡ್‌ಗಳಿಗೆ ಒಳಚರಂಡಿ ಮತ್ತು ನೀರು ಸರಬರಾಜು ಯೋಜನೆಗೆ ಸಂಬಂಧಿಸಿದ ಯಾವುದೇ ಪ್ರಸ್ತಾವನೆಯನ್ನು ಸಿದ್ಧಪಡಿಸಿರುವುದಿಲ್ಲ. |
| ಈ) | ಬೀದರ್ ನಗರದ ಅಭಿವೃದ್ಧಿಗೆ ಸರ್ಕಾರ ಇನ್ನು ಹೆಚ್ಚಿನ ಯೊಜನೆಗಳನ್ನು ರೂಪಿಸುವುದೇ ? (ಸಂಪೂರ್ಣ ವಿವರ ನೀಡುವುದು) | ಇಂತಹ ಯಾವುದೇ ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ. |

**ಸಂಖ್ಯೆ: ನಅಇ 52 ಯುಎಂಎಸ್ 2021**

**(ಬಿ.ಎ.ಬಸವರಾಜ)**

ನಗರಾಭಿವೃದ್ಧಿ ಸಚಿವರು.